ಭದ್ರಾ - 10ವರ್ಷದ ಬಾಲಿಕಿ (ನವರಾತ್ರಿ ಕನ್ಯಾಸಂಕೇತ)
ಬೃಹಸ್ಪತಿ ಅದ್ಭುತ - ಮೃಗವು ಸರ್ಪ, ಕಪ್ಪೆ, ಮನುಷ್ಯಾಕೃತಿ ಶಿಶುವನ್ನು ಹಡೆಯುವದು.
ಬ್ರಾಹ್ಮಣ ಪರಿಷತ್ತು - ಧಾರ್ಮಿಕ ಸಮಸ್ಯೆ ಪರಿಹಾರಕ್ಕಾಗಿ ನಿರ್ಣಯ ಕೈಕೊಳ್ಳಬಲ್ಲ . ನಾಲ್ಕು ಅಥವಾ ಹೆಚ್ಚಿನ ಗುಂಪು.
ಬ್ರಹ್ಮಕೂರ್ಚ ಹವನ - ಪ್ರಾಯಶ್ಚಿತ್ತ ರೂಪವಾದ ಪಂಚಗವ್ಯ ಹೋಮ.
ಬ್ರಾಹ್ಮವಿವಾಹ - ಯೋಗ್ಯ ವರನಿಗೆ ಸಾಲಂಕೃತ ಮಗಳನ್ನು ವಿಧ್ಯುಕ್ತವಿವಾಹ ಮಾಡುವದು.
ಬಾಲಕ - 1ರಿಂದ 5ವರ್ಷದ ಒಳಗಿನವ.
ಬುದಾದ್ಭುತ - ಗರ್ಭಪಾತ, ಅವಳಿ ಸದಂತ ಜನನ, ಹುಟ್ಟಿದಾಕ್ಷಣ ಸಾಯುವದು.
ಬ್ರಾಹ್ಮತೀರ್ಥ - ಅಂಗುಷ್ಠದ ಬುಡ.
ಬಹೂದಕ - ಕಾಷಾಯ ವಸ್ತ್ರಧಾರಣೆ ಮಾಡಿ ಏಳುಮನೆ ಭಿಕ್ಷೆ ಮೂಲಕ ಜೀವಿಸುವದು.

ಮ

ಮಧ್ಯಾಹ್ನ - ದಿನದ ಐದು ಭಾಗದಲ್ಲಿಯ ಮೂರನೇ ಭಾಗ.
ಮೈಥುನ - ಗಂಡು ಅಥವಾ ಹೆಣ್ಣು, ಸ್ಮರಣೆ ಇತ್ಯಾದಿ ಅಷ್ಟವಿಧ ಕಾಮನೆಗಳಲ್ಲಿ ಕೆಲವು ಅಥವಾ ಎಲ್ಲವನ್ನೂ ಹೊಂದಲು ಅಪೇಕ್ಷಿಸುವದು.
ಮಹಾವೇಧ - 56ಘಟಿ ದಶಮಿ.
ಮಹಾಪ್ರಲಯವೇಧ - 58 ಘಟಿ ದಶಮಿ.
ಮಹಾವಾರಣೀ - ವಾರುಣಿಯು ಶನಿವಾರ ಬಂದಾಗ.
ಮಹಾಜ್ಯೇಷ್ಠಯೋಗ - ಜ್ಯೇಷ್ಠ ಪೂರ್ಣಿಮೆಯಂದು ಬೃಹಸ್ಪತಿ ಚಂದ್ರರು ಜ್ಯೇಷ್ಠಾ ನಕ್ಷತ್ರದಲ್ಲಿದ್ದು ರವಿಯು ರೋಹಿಣಿ ನಕ್ಷತ್ರದಲ್ಲಿರುವದು.
ಮಹಾಲಯ - ಭಾದ್ರಪದ ಕೃಷ್ಣಪಕ್ಷ.
ಮಹಾಕಾರ್ತಿಕೀ - ಕಾರ್ತಿಕ ಹುಣ್ಣಿಮೆಯಂದು ಚಂದ್ರನು ರೋಹಿಣಿ ನಕ್ಷತ್ರದಲ್ಲಿರುವದು.
ಮಹಾನಾಮ್ನಿವ್ರತ - ವಟುವು 13ನೇ ವರ್ಷದಲ್ಲಿ ಮಾಡುವ ವ್ರತ.
ಮಹಾವ್ರತ - ವಟುವು 14ನೇ ವರ್ಷದಲ್ಲಿ ಮಾಡುವ ವ್ರತ.
ಮನೋದತ್ತ - ಬೇರೆ ಪುರುಷನನ್ನು ವರಿಸಲು ಯೋಚಿಸಿದವಳು.
ಮುಂಡನ - ಚೌಲ, ಉಪನಯನಾದಿಗಳಲ್ಲಿ ಮಾಡುವ ಕ್ಷೌರ ಕರ್ಮ.
ಮಧುಪರ್ಕ - ಹಾಲು, ಮೊಸರು, ತುಪ್ಪ, ಜೇನುತುಪ್ಪಗಳ ಮಿಶ್ರಣದಿಂದ ಮಾಡುವ ಧಾರ್ಮಿಕ ಉಪಚಾರ.
ಮಾಧುಕರೀ - ಸಂನ್ಯಾಸಿಗಳು 5 ಅಥವಾ 7 ಮನೆಗಳಿಂದ ಭಿಕ್ಷೆ ಎತ್ತುವದು. (ಯತಿಗಳ ಜೀವನ ಕ್ರಮ ಇದಾಗಿದ್ದು ಇತರ ನಿಯಮಗಳಾದ ಮಂಚ, ಬಿಳಿವಸ್ತ್ರ, ಸ್ತ್ರೀ ಸಂಬಂಧ ಚರ್ಚೆ, ಚಾಂಚಲ್ಯ, ಹಗಲು

ನಿದ್ರೆ, ವಾಹನ ಮೂಲಕ ಸಂಚಾರ — ಇತ್ಯಾದಿ ಯಾವುದನ್ನು ಉಲ್ಲಂಘಿಸಿದರೂ ಸಂನ್ಯಾಸಿಗಳು ಪತಿತರಾಗುತ್ತಾರೆ.)

ಮುಸಲಸ್ನಾನ - ಶರೀರದ ಹೊಲಸನ್ನು ತೊಳೆಯಲು ವಿಧಿರಹಿತ ಸ್ನಾನ.

ಮಹಾಪ್ರಸ್ಥಾನ - ಜೀವದ ಆಸೆಯನ್ನು ತ್ಯಜಿಸಿ ಸಾಯುವ ಪರ್ಯಂತ ಉತ್ತರಾಭಿಮುಖವಾಗಿ ಸಾಗುವದು.

ಯ

ಯುಗ್ಮತಿಥಿ - ಸಮ ಮತ್ತು ವಿಷಮ ಸಂಖ್ಯೆಗಳ ತಿಥಿಗಳು ಯುಗ್ಮಗಳು. (ಉದಾ- ಬಿದಿಗೆ-ತದಿಗೆ ಸಮ. ತದಿಗೆ-ಚತುರ್ಥಿ ಸಮವಲ್ಲ)

ಯಾಮ - ಏಳೂವರೆ ಘಟಿ. (3ತಾಸಿನ ಅಳತೆ)

ಯೂಪ - ಯಜ್ಞಾದಿಗಳಲ್ಲಿ ಬಳಸುವ ಮರದ ವಿಶಿಷ್ಟ ಆಕೃತಿ ಉಳ್ಳ ಕಂಬ.

ಯವೀಯಸೀ - ವಯಸ್ಸು, ದೇಹತೂಕಗಳಿಂದ ಕಡಿಮೆಯಾದವಳು.

ಯಕ್ಷಕರ್ದಮ - ಕಸ್ತೂರಿ, ಕುಂಕುಮ ಇತ್ಯಾದಿ.

ರ

ರೋಹಿಣೀ - 5ವರ್ಷದ ಬಾಲಕಿ. (ನವರಾತ್ರಿ ಪೂಜಾ ಸಂಜ್ಞೆ)

ರಾಕ್ಷಸ ವೇಧ - 60ಘಟಿ ದಶಮಿ.

ರಾಕ್ಷಸ ವಿವಾಹ - ಬಲಾತ್ಕಾರದಿಂದ ಆದ ವಿವಾಹ.

ರೋದನ ಶ್ರಾದ್ಧ - ನಿರ್ಗತಿಕನು ಅರಣ್ಯಕ್ಕೆ ಹೋಗಿ (ಸಮಂತ್ರಕ) ಪಿತೃಗಳನ್ನು ಕೂಗುವದು.

ರುದ್ರಗಣ - ಪ್ರೇತೋದ್ದೇಶದಿಂದ ಆಹ್ವಾನಿತ ಏಕಾದಶ ರುದ್ರವರ್ಗ.

ಲ

ಲೋಹಾಭಿಸಾರಿಕಾ - ನವರಾತ್ರಿ ಪ್ರತಿಪದೆಯಿಂದ ಅಷ್ಟಮಿ ಪರ್ಯಂತ ರಾಜರು ಶಸ್ತ್ರ, ರಾಜೋಪಚಾರ ಸಾಮಗ್ರಿಗಳನ್ನು ಪೂಜಿಸುವದು.

ಲೇಪಭಾಗಿಗಳು - ಪಿಂಡಭಾಗಿಗಳಿಂದ ಮುಂದಿನ ಮೂರು ಪಿತೃಗಳು.

ಲಘು ಆಶೌಚ - ಮಾತುಲಾದಿಗಳಿಂದ ಉಂಟಾದ ಆಶೌಚ.

ವ

ವಿಷ್ಣು ಶೃಂಖಲ ಯೋಗ - ಭಾದ್ರಪದ ಶುಕ್ಲ ಏಕಾದಶಿ, ದ್ವಾದಶಿ, ಶ್ರವಣ ಸಂಯೋಗ

ವಿದ್ಧಾ - ಹಗಲಿನ ಕೆಲಭಾಗ ಮಾತ್ರ ಇರುವ ತಿಥಿ.

ವ್ರತ - ನಿರ್ದಿಷ್ಟ ನಿಯಮ, ಪೂಜಾ ಇತ್ಯಾದಿ ಸ್ವರೂಪದ ಕರ್ಮಾಚರಣೆ.

ವೈಷ್ಣವ - ವಿಷ್ಣು ಸಂಬಂಧಿ ದೀಕ್ಷೆ ಹೊಂದಿದವರು. (ಏಕಾದಶಿ ತಿಥಿ ನಿರ್ಣಯದಲ್ಲಿ)

| | | |
|---|---|---|
| ವೇಧಾ | - | 56 ಘಟಿ ದಶಮಿ. |
| ವಂಜುಲೀ | - | ದ್ವಾದಶಿಯು ದಿನಪೂರ್ತಿ ಇದ್ದರೆ. |
| ವಿಜಯಾ | - | ದ್ವಾದಶಿಯ ದಿನ ಶ್ರವಣ ನಕ್ಷತ್ರ. |
| ವ್ಯತಿಷಂಗ | - | ಎರಡು ವಿಧಿಗಳನ್ನು ಹೊಂದಿಸಿಕೊಂಡು ಮಾಡುವ ವಿಧಿ. (ದರ್ಶ ಶ್ರಾದ್ಧ, ಪಿಂಡ ಪಿತೃಯಜ್ಞ) |
| ವಾರುಣೀ | - | ಚೈತ್ರ ಕೃಷ್ಣ ಚತುರ್ದಶಿಯಂದು ಶತಭಿಷಾ ನಕ್ಷತ್ರಯೋಗ. |
| ವಿಷುವ | - | ತುಲಾ, ಮೇಷ ಸಂಕ್ರಾಂತಿಗಳು. |
| ವಾಜಿನಿ ರಾಜನ | - | ನವರಾತ್ರಿಯಲ್ಲಿ ರಾಜರು ಕುದುರೆಗೆ (ಉಚ್ಚೈಶ್ರವ-ರೈವತ) ಸಲ್ಲಿಸುವ ವಿಶೇಷ ಪೂಜೆ. |
| ವರ್ಧಾಪನವಿಧಿ | - | ಮಕ್ಕಳ ಆಯುರ್ವೃಧ್ಯರ್ಥ ಮಾಡುವ ವಿಧ್ಯುಕ್ತ ಕರ್ಮ. |
| ವೇದಿ | - | ಉಪನಯನ, ವಿವಾಹ ಇತ್ಯಾದಿ ಉದ್ದೇಶಗಳಿಗಾಗಿರುವ ನಿರ್ದಿಷ್ಟ ಎತ್ತರ ಸ್ಥಳ. (ವೇದಿಕೆ) |
| ವಚನ | - | ಕರ್ತೃವು ಹೇಳುವ ವಿಜ್ಞಾಪನೆ. |
| ವಾಗ್ದತ್ತಾ | - | ಬೇರೆ ಪುರುಷನಲ್ಲಿ ಮದುವೆ ಆಗುವದಾಗಿ ಮಾತುಕೊಟ್ಟವಳು. |
| ವ್ರತಗಳು | - | (ಬ್ರಹ್ಮಚಾರಿ) ಮಹಾನಾಮ್ನಿ, ಮಹಾವ್ರತ, ಗೋದಾನ ವ್ರತ. |
| ವೈಶ್ವದೇವ | - | ದೇವಯಜ್ಞ, ಭೂತಯಜ್ಞ, ಪಿತೃಯಜ್ಞ. |
| ವೃಕ್ಷಾರೋಪಣ | - | ವಿಧ್ಯುಕ್ತ ಕಾಲದಲ್ಲಿ ಸಸಿ ಇತ್ಯಾದಿ ನೆಡುವದು. |
| ವಿರಜಾಹೋಮ | - | ಸಂನ್ಯಾಸ ಸ್ವೀಕರಿಸುವವರ ದೇಹ ಮತ್ತು ಚಿತ್ತ ಹಾಗೂ ಸಮಸ್ತ ಇಂದ್ರಿಯ ಶುದ್ಧಿಗಾಗಿ ಮಾಡುವ ಹೋಮ. |
| ವೃಷೋತ್ಸರ್ಗ | - | ಪ್ರೇತದ ಸಲುವಾಗಿ ವಿಧ್ಯುಕ್ತವಾಗಿ ಪೂಜಿಸಿ ಎತ್ತನ್ನು ಬಿಡುವದು. |
| ವಿವಿದಿಷಾ | - | ದಂಡಧಾರಣ ರೂಪವಾದ ಸಂನ್ಯಾಸ ಸ್ವೀಕಾರ. |
| ವಾರಶೂಲ | - | ಪ್ರಯಾಣ ನಿಷಿದ್ಧ ವಾರ. |
| ವಿಕಿರಪಿಂಡ | - | ಗೋಧಿ, ದರ್ಭೆ, ಅನ್ನಗಳ ಮಿಶ್ರಣವನ್ನು ಮಂತ್ರಪೂರ್ವಕ ನಿರ್ದಿಷ್ಟ ಸ್ಥಳದಲ್ಲಿ ವಿಧಿವತ್ತಾಗಿ ಬೀರುವದು. |

### ಶ, ಷ, ಸ

| | | |
|---|---|---|
| ಶಾಂತಿ | - | ಅನಿಷ್ಟ ನಿವಾರಣೆಗಾಗಿ ಮಾಡುವ ಹೋಮ, ಪೂಜೆ ಇತ್ಯಾದಿ. |
| ಶಾಂಭವಿ | - | 8 ವರ್ಷದ ಬಾಲಕಿ. (ನವರಾತ್ರಿ ಪೂಜಾ ಸಂಜ್ಞೆ) |
| ಶ್ರಾದ್ಧ | - | ವಿಧಿ ನಿಯಮ ಪಾಲಿಸುತ್ತ ಅತ್ಯಾಸಕ್ತನಾಗಿ ಪಿತ್ರಾದಿಗಳ ಮೃತತಿಥಿ ಆಚರಣೆ. |
| ಶಿಶು | - | ಅನ್ನಪ್ರಾಶನ ಮಾಡಿಸಿಕೊಳ್ಳುವ ಮಗು. (ಹಲ್ಲು ಬರುವ ಪರ್ಯಂತದ ವಯಸ್ಸು) |
| ಶುದ್ಧಾ ತಿಥಿ | - | ಹಗಲು ಪೂರ್ತಿ ಇರುವ ತಿಥಿ. |
| ಶೈವ | - | ಶಿವಪೂಜಕರು. |

| | | |
|---|---|---|
| ಶೀಲೋಂಛನ | - | ತಾನಾಗಿ ಉದುರಿದ ಧಾನ್ಯ ಸಂಗ್ರಹಿಸಿ ಜೀವಿಸುವದು. |
| ಶಾಲಿನೀ | - | ಇನ್ನೊಬ್ಬರಲ್ಲಿ ಕೈಚಾಚದೆ ಕುಟುಂಬವನ್ನು ಪೋಷಿಸುವದು. |
| ಶ್ವಸ್ತನ | - | ಎರಡು ದಿನ ಸಾಲುವಷ್ಟು ಧಾನ್ಯ ಸಂಗ್ರಹ. |
| ಶಾಖಾಸಂಸ್ಕಾರ | - | ದೇಶಾಂತರ ಇತ್ಯಾದಿ ಮೃತ ಸಂದರ್ಭದಲ್ಲಿ ದರ್ಭ ಇತ್ಯಾದಿಗಳಿಂದ ಶರೀರಾಕೃತಿ ರಚಿಸಿ ಮಾಡುವ ಉತ್ತರ ಕ್ರಿಯೆ. |
| ಸಖಂಡಾ | - | ದಿನದಲ್ಲಿ ಅಪೂರ್ಣವಾದ ತಿಥಿ. |
| ಸಂಗಮ | - | ದಿನದ 5ಭಾಗದಲ್ಲಿಯ 2ನೇ ಭಾಗ. |
| ಸಾಯಾಹ್ನ | - | ದಿನದ 5 ನೇ ಭಾಗ. (5 ಭಾಗದಲ್ಲಿ) |
| ಸೌರಮಾನ | - | ಸೂರ್ಯನ ಗತಿಗನುಗುಣವಾಗಿ ಎಣಿಸುವ ಮಾನ. |
| ಸೌರಮಾಸ | - | ಒಂದು ರಾಶಿಯಲ್ಲಿ ಸೂರ್ಯ ಸಂಚರಿಸುವ ಕಾಲ. |
| ಸಾವನಮಾಸ | - | 30ದಿನಗಳ ಮಾಸ. |
| ಸ್ಮಾರ್ತ | - | ವೈಷ್ಣವ ದೀಕ್ಷೆ ಪಡೆಯದವರು. |
| ಸ್ಥಾಲೀಪಾಕ | - | ಯಾಗಕ್ಕಾಗಿ ಸಿದ್ಧಪಡಿಸುವ ವಿಶೇಷ ಚರು. |
| ಸಚೈಲಸ್ನಾನ | - | ತೊಟ್ಟ ಬಟ್ಟೆ ಸಹಿತ ಮಾಡುವ ಸ್ನಾನ. |
| ಸಂಧ್ಯೆ | - | ಸೂರ್ಯೋದಯ ಪೂರ್ವ 3ಘಟಿ, ಅಸ್ತದ ನಂತರ 3ಘಟಿ. |
| ಸಂನ್ಯಾಸಿ ಮಹಾಲಯ | - | ಭಾದ್ರಪದ ಕೃಷ್ಣ ದ್ವಾದಶಿ. |
| ಸಮಾವರ್ತನೆ | - | ಬ್ರಹ್ಮಚಾರಿಯು ಅಧ್ಯಯನ, ಗುರುದಕ್ಷಿಣೆ ಮುಗಿಸಿ ಅನುಜ್ಞೆ ಪಡೆದು ವ್ರತದ ಕೊನೆಯಲ್ಲಿ ಮಾಡುವ ಸ್ನಾನ. |
| ಸಾಪತ್ನ್ಯ ಮಾತೃ | - | ಮೊದಲ ಹೆಂಡತಿಯ ಮಗನಿಗೆ ತಂದೆಯ ಎರಡನೆ ಹೆಂಡತಿಯಾದವಳು ಸಾಪತ್ನ್ಯ ಮಾತೃ. |
| ಸೀಮಂತ(ಉನ್ನಯನ) | - | ಸ್ತ್ರೀ ಸಂಸ್ಕಾರ, ಗರ್ಭಾಭಿವೃದ್ಧಿ, ಭೂತ-ಪೈಶಾಚಿಕ. ಬಾಧಾನಿವಾರಣೆ, ಸೌಭಾಗ್ಯ ಪ್ರಾಪ್ತಿಗಾಗಿ ಮಾಡುವ ಕರ್ಮವಿಶೇಷ. |
| ಸೂತಿಕಾಗೃಹ | - | ಬಾಣಂತಿ ಮನೆ. |
| ಸಿನೀವಾಲಿ | - | ಅಮಾವಾಸ್ಯೆಯ ಪ್ರಥಮ ಯಾಮ. |
| ಸೂರ್ಯಾದ್ಭುತ | - | ತಲೆ ಇಲ್ಲದೆ ಅಥವಾ 2-3 ತಲೆ ಸಹಿತ ಹುಟ್ಟುವದು. |
| ಸ್ಥಾಲೀ | - | ಹೋಮಗಳಲ್ಲಿ ಉಪಯೋಗಿಸುವ ಸಂಸ್ಕಾರಗೊಂಡ ಪಾತ್ರೆ. |
| ಸ್ಥಂಡಿಲ | - | ಹೋಮಕ್ಕಾಗಿ ರಂಗವಲ್ಲಿ ಇತ್ಯಾದಿಗಳಿಂದ ನಿರ್ದಿಷ್ಟ ರೀತಿಯಲ್ಲಿ ನಿರ್ಮಿಸಿದ ಹೋಮದ ಸ್ಥಳ. |
| ಸಜ್ಯೋತಿ ಆಶೌಚ | - | ದೇಶಾಧಿಪತಿ ಇತ್ಯಾದಿ ಮರಣಾಶೌಚ. |
| ಸರ್ವತ್ಯಾಗ | - | ಪುತ್ರ, ವಿತ್ತ, ಜನ, ಪ್ರಾಪಂಚಿಕ ಸುಖವನ್ನು ತ್ಯಜಿಸುವದು. |
| ಸವ್ಯ | - | ಪ್ರದಕ್ಷಿಣಾಕ್ರಮ. |
| ಸಂಸೃಷ್ಟಿ | - | ಒಮ್ಮೆ ಬೇರೆ ಅಡಿಗೆ ಮಾಡುವ ಮೂಲಕ ಪ್ರತ್ಯೇಕಗೊಂಡವ, ಪುನಃ ಒಟ್ಟಾದ ವ್ಯಕ್ತಿ. |
| ಸಂಸ್ರಾವ | - | ದರ್ಭೆಯ ತುದಿಯಿಂದ ಅರ್ಘ್ಯಪಾತ್ರಕ್ಕೆ ಬೀಳುವ ಜಲ. |

## ಹ

| | | |
|---|---|---|
| ಹಂಸ | - | ನಿಯಮ ಯುಕ್ತರಾಗಿ, ಏಕದಂಡಧಾರಿಗಳಾಗಿರುವ ಸಂನ್ಯಾಸಿಗಳು. |

